# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2137 |
| ಸದಸ್ಯರ ಹೆಸರು | : | ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್)<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 25-03-2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

****

| ಕ್ರಮ ಸಂ. | ಪ್ರಶ್ನೆ | ಉತ್ತರ |
|---|---|---|
| 1. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರದ 110 ಹಳ್ಳಿಗಳಿಗೆ ಹಾಗೂ ಅದರ ಸುತ್ತಮುತ್ತಲ ಬಡಾವಣೆಗಳಲ್ಲಿ ಕಾವೇರಿ ಕುಡಿಯುವ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಗಳಿಗೆ ಸಮಗ್ರ ಮಾಸ್ಟರ್ ಪ್ಲಾನ್ ತಯಾರಿಸಲಾಗಿದೆಯೇ; ಈ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಾದ ಮೊತ್ತವನ್ನು ಸರಿದೂಗಿಸಿಕೊಳ್ಳುವ ಬಗೆ ಹೇಗೆ; | ಬೆಂಗಳೂರು ಜಲಮಂಡಳಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿದ 110 ಹಳ್ಳಿಗಳಿಗೆ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು ಮತ್ತು ಒಳಚರಂಡಿ ವ್ಯವಸ್ಥೆಯನ್ನು ಒದಗಿಸುವ ಯೋಜನೆಯನ್ನು ಕೈಗೆತ್ತಿಕೊಂಡಿರುತ್ತದೆ.<br><br>ಸರ್ಕಾರವು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿರುವ 110 ಹಳ್ಳಿಗಳಿಗೆ ಕುಡಿಯುವ ನೀರು ಯೋಜನೆ ಮತ್ತು ಲೆಕ್ಕಕ್ಕೆ ಸಿಗದ ನೀರಿನ ನಿಯಂತ್ರಣ ಯೋಜನೆಗಳಿಗೆ ಅಂದಾಜು ವೆಚ್ಚ ರೂ.1500.00 ಕೋಟಿಗಳನ್ನು 2/3 ಪ್ರಮಾಣವನ್ನು ಸರ್ಕಾರವು ಹಾಗೂ 1/3 ಪ್ರಮಾಣವನ್ನು ಬೆಂಗಳೂರು ಜಲಮಂಡಳಿಯು ಭರಿಸುವಂತೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಿರುತ್ತದೆ.<br><br>ಸರ್ಕಾರವು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿರುವ 110 ಹಳ್ಳಿಗಳಿಗೆ ಒಳಚರಂಡಿ (ಲ್ಯಾಟರಲ್ಸ್) ಕಲ್ಪಿಸುವ ಯೋಜನೆಗೆ ಅಂದಾಜು ವೆಚ್ಚ ರೂ.1000 ಕೋಟಿ. ಬೆಂಗಳೂರು ಜಲಮಂಡಳಿಯ ಸ್ವಂತ ವೆಚ್ಚ – ರೂ.500.00 ಕೋಟಿ ಹಾಗೂ ಸರ್ಕಾರದ ಅನುದಾನ – ರೂ.250.00 ಕೋಟಿ ಮತ್ತು ಸರ್ಕಾರವು ಸಾಲದ ರೂಪದಲ್ಲಿ ನೀಡುವ ಹೆಚ್ಚುವರಿ ಹಣ – ರೂ.250.00 ಕೋಟಿಗಳಿಗೆ ಅನುಮೋದನೆಯನ್ನು ನೀಡಿರುತ್ತದೆ. |
| 2 | ಪ್ರಸ್ತುತ ಬಿ.ಬಿ.ಎಂ.ಪಿ.ಗೆ ಹೊಸದಾಗಿ ಸೇರಿದ ಯಾವ ಯಾವ ಹಳ್ಳಿಗಳಿಗೆ ಹಾಗೂ ಆ ಹಳ್ಳಿಗಳ ಸುತ್ತಮುತ್ತ ಇರುವ ಯಾವ ಯಾವ ಬಡಾವಣೆಗಳಿಗೆ ಕಾವೇರಿ ಕುಡಿಯುವ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ; ಈ ಯೋಜನೆಗೆ ಒದಗಿಸಿರುವ ಅನುದಾನ ಎಷ್ಟು; ಹಾಗೂ ಯಾವ ಏಜೆನ್ಸಿ (ಸಂಸ್ಥೆ) | ಬಿ.ಬಿ.ಎಂ.ಪಿ.ಗೆ ಹೊಸದಾಗಿ ಸೇರಿದ 110 ಹಳ್ಳಿಗಳ ಪೈಕಿ 51 ಹಳ್ಳಿಗಳಿಗೆ ಕುಡಿಯುವ ನೀರನ್ನು ಒದಗಿಸಲು ಅಧಿಸೂಚನೆಯನ್ನು ಹೊರಡಿಸಲಾಗಿದ್ದು, ಸದರಿ ಹಳ್ಳಿಗಳ ಬಹುತೇಕ ಪ್ರದೇಶಗಳಿಗೆ ಈಗಾಗಲೇ ಕುಡಿಯುವ ನೀರನ್ನು ಲಭ್ಯವಿರುವ ಮೂಲಗಳಿಂದ ಸರಬರಾಜು ಮಾಡಲಾಗುತ್ತಿದೆ. (51 ಹಳ್ಳಿಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.).<br><br>110 ಹಳ್ಳಿಗಳಿಗೆ ನೀರು ಸರಬರಾಜು ಒದಗಿಸುವ ಯೋಜನೆಯ ಕಾಮಗಾರಿಗಳನ್ನು ದರಖಾಸ್ತು ಪ್ರಕ್ರಿಯೆಯ ಮೂಲಕ ಗುತ್ತಿಗೆದಾರರಾದ ಮೆ॥ ಎಲ್ & ಟಿ ಲಿಮಿಟೆಡ್ / ಮೆ॥ ಲಕ್ಷ್ಮಿ ಸಿವಿಲ್ ಇಂಜಿನಿಯರಿಂಗ್ ಸರ್ವೀಸಸ್ ಪ್ರೈವೇಟ್ |

...2

| | | |
|---|---|---|
| | ಮುಖಾಂತರ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ; (ಪೂರ್ಣ ವಿವರಗಳನ್ನು ಒದಗಿಸುವುದು) | ಲಿಮಿಟೆಡ್ / ಮೆ॥ ಮೇಘಾ ಇಂಜಿನಿಯರಿಂಗ್ & ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ / ಮೆ॥ ದಿ ಇಂಡಿಯನ್ ಹ್ಯೂಮ್ ಪೈಪ್ ಕಂಪನಿ ಲಿಮಿಟೆಡ್ ಹಾಗೂ ಮೆ॥ ಎಸ್.ಎಂ.ಸಿ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್‌ಗೆ ಒಟ್ಟು ರೂ.982.77 ಕೋಟಿಗಳಿಗೆ ನೀಡಲಾಗಿದ್ದು, ಕಾಮಗಾರಿಗಳು ಮೇ 2017 ರಲ್ಲಿ ಪ್ರಾರಂಭಿಸಲಾಗಿದ್ದು, ಪ್ರಸ್ತುತ ಕಾಮಗಾರಿಗಳು ಪೂರ್ಣಗೊಳ್ಳುವ ಹಂತದಲ್ಲಿದ್ದು, ಜೂನ್ 2021 ರಲ್ಲಿ ಪೂರ್ಣಗೊಳಿಸಲು ಯೋಜಿಸಲಾಗಿದೆ. ಒಟ್ಟಾರೆಯಾಗಿ 2773 ಕಿ.ಮೀ.ಗಳಲ್ಲಿ 2770.65 ಕಿ.ಮೀ.ನಷ್ಟು ಭೌತಿಕ ಪ್ರಗತಿಯಾಗಿರುತ್ತದೆ.<br><br>ಸರ್ಕಾರವು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿರುವ 110 ಹಳ್ಳಿಗಳಿಗೆ ಒಳಚರಂಡಿ (ಲ್ಯಾಟರಲ್ಸ್) ಕಲ್ಪಿಸುವ ಯೋಜನೆಯನ್ನು ದರಖಾಸ್ತು ಪ್ರಕ್ರಿಯೆ ಮೂಲಕ ಗುತ್ತಿಗೆದಾರರಾದ ಮೆ॥ ಎಲ್ & ಟಿ ಲಿಮಿಟೆಡ್ ಹಾಗೂ ಮೆ॥ ಕಿಲಾರಿ ಇನ್ಫ್ರಾಸ್ಟ್ರಕ್ಚರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಮಾರ್ಚ್ 2018 ರಲ್ಲಿ ಒಟ್ಟು ರೂ.925.06 ಕೋಟಿಗಳಿಗೆ ನೀಡಲಾಗಿದ್ದು, ಈ ಕಾಮಗಾರಿಯನ್ನು 36 ತಿಂಗಳುಗಳಲ್ಲಿ ಪೂರ್ಣಗೊಳಿಸಲು ಯೋಜಿಸಲಾಗಿದೆ. ಕಾಮಗಾರಿಗಳು ಒಟ್ಟಾರೆಯಾಗಿ 1568 ಕಿ.ಮೀ.ಗಳಲ್ಲಿ 1095 ಕಿ.ಮೀ.ನಷ್ಟು ಭೌತಿಕ ಪ್ರಗತಿಯಾಗಿರುತ್ತದೆ. |
| 3 | ಈ ಹಳ್ಳಿಗಳಿಗೆ ಚಾಲ್ತಿಯಲ್ಲಿರುವ ಒಳಚರಂಡಿ ಮತ್ತು ನೀರು ಸರಬರಾಜು ಕಾಮಗಾರಿಗಳನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುತ್ತದೆ; ಉಳಿದ ಹಳ್ಳಿಗಳಲ್ಲಿ ಯಾವಾಗ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು? | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿರುವ 110 ಹಳ್ಳಿಗಳಿಗೆ ಒಳಚರಂಡಿ (ಲ್ಯಾಟರಲ್ಸ್) ಕಲ್ಪಿಸುವ ಯೋಜನೆಯನ್ನು ಮಾರ್ಚ್ 2022ರ ಅಂತ್ಯಕ್ಕೆ ಪೂರ್ಣಗೊಳಿಸಲು ಯೋಜಿಸಲಾಗಿದೆ ಹಾಗೂ 110 ಹಳ್ಳಿಗಳಿಗೆ ನೀರು ಸರಬರಾಜು ಮಾಡುವ ಯೋಜನೆಯ ಕಾಮಗಾರಿಗಳನ್ನು ಜೂನ್ 2021ರ ಅಂತ್ಯಕ್ಕೆ ಪೂರ್ಣಗೊಳಿಸಲು ಯೋಜಿಸಲಾಗಿದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿರುವ 110 ಹಳ್ಳಿಗಳಿಗೆ ಕಾವೇರಿ 5ನೇ ಹಂತದ ಯೋಜನೆ ಅಡಿಯಲ್ಲಿ ಕುಡಿಯುವ ನೀರಿನ ಕಾಮಗಾರಿಯನ್ನು ಕೈಗೆತ್ತಿಕೊಂಡಿದ್ದು, ಈ ಕಾಮಗಾರಿಯು 2023-24ರಲ್ಲಿ ಪೂರ್ಣಗೊಂಡ ನಂತರ ಎಲ್ಲಾ 110 ಹಳ್ಳಿಗಳಿಗೆ ಸಂಪೂರ್ಣವಾಗಿ ಕುಡಿಯುವ ನೀರಿನ ಹಾಗೂ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಯೋಜಿಸಲಾಗಿದೆ. |

ಸಂಖ್ಯೆ: ನಅಇ 52 ಎಂಎನ್ಐ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

ಅನುಬಂಧ

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ 110 ಹಳ್ಳಿಗಳ ಪೈಕಿ 51 ಹಳ್ಳಿಗಳಿಗೆ ಕುಡಿಯುವ ನೀರನ್ನು ಒದಗಿಸಲು ಅಧಿಸೂಚನೆ ಹೊರಡಿಸಿರುವ ವಿವರ

| ಕ್ರ ಸಂ | ಅಧಿಸೂಚನೆ ಹೊರಡಿಸಿರುವ ಹಳ್ಳಿಗಳ ಹೆಸರು | ಕ್ರ ಸಂ | ಅಧಿಸೂಚನೆ ಹೊರಡಿಸಿರುವ ಹಳ್ಳಿಗಳ ಹೆಸರು |
|---|---|---|---|
| 1 | ಹೇರೊಹಳ್ಳಿ | 27 | ಚಿಕ್ಕಸಂದ್ರ |
| 2 | ಸೊಣ್ಣೆನಹಳ್ಳಿ | 28 | ಸಿಡೇದಹಳ್ಳಿ |
| 3 | ಹೊರಮಾವು (ಭಾಗಶಃ) | 29 | ಅಂದ್ರಹಳ್ಳಿ |
| 4 | ದಾಸರಹಳ್ಳಿ (ಭಾಗಶಃ) | 30 | ಕರಿಓಬನಹಳ್ಳಿ |
| 5 | ಚಳ್ಕರೆ (ಭಾಗಶಃ) | 31 | ಆರೇಹಳ್ಳಿ (ಭಾಗಶಃ) |
| 6 | ಕೊಡ್ಲು (ಭಾಗಶಃ) | 32 | ವಸಂತಪುರ (ಭಾಗಶಃ) |
| 7 | ನಾಗನಾಥಪುರ (ಭಾಗಶಃ) | 33 | ಗಿಡದಕೊನೇನಹಳ್ಳಿ (ಭಾಗಶಃ) |
| 8 | ಪರಪ್ಪನ ಅಗ್ರಹಾರ (ಭಾಗಶಃ) | 34 | ನಾಗೊಂಡನಹಳ್ಳಿ |
| 9 | ಗಾಣಕಲ್ಲು (ಭಾಗಶಃ) | 35 | ಕಾಳೇನ ಅಗ್ರಹಾರ |
| 10 | ತೂಬರಹಳ್ಳಿ | 36 | ಜುನ್ನಸಂದ್ರ |
| 11 | ಸಿದ್ದಾಪುರ (ಭಾಗಶಃ) | 37 | ಕಸವನಹಳ್ಳಿ |
| 12 | ಚಿಕ್ಕ ಬೆಟ್ಟಹಳ್ಳಿ (ಭಾಗಶಃ) | 38 | ಅಂಬಲಿಪುರ |
| 13 | ಬೇಗೂರು | 39 | ದೊಡ್ಡಬೆಟ್ಟಹಳ್ಳಿ |
| 14 | ಹರಳೂರು (ಭಾಗಶಃ) | 40 | ಉಲ್ಲಾಳು |
| 15 | ಅಬ್ಬಿಗೆರೆ | 41 | ಆಲಹಳ್ಳಿ |
| 16 | ಮೇಡರಹಳ್ಳಿ | 42 | ಅಂಜನಾಪುರ |
| 17 | ಶೆಟ್ಟಿಹಳ್ಳಿ | 43 | ಬೆಳ್ಳಂದೂರು |
| 18 | ಉತ್ತರಹಳ್ಳಿ (ಭಾಗಶಃ) | 44 | ಕೈಕೊಂಡ್ರಹಳ್ಳಿ |
| 19 | ಎಲ್ಲೇನಹಳ್ಳಿ | 45 | ಲಿಂಗಧೀರನಹಳ್ಳಿ ಬಿ |
| 20 | ದೊಡ್ಡಕಲ್ಲಸಂದ್ರ | 46 | ಹೊಸಹಳ್ಳಿ |
| 21 | ರಘುವನಹಳ್ಳಿ | 47 | ವಡ್ಡರಪಾಳ್ಯ (ಭಾಗಶಃ) |
| 22 | ರಾಮಗೊಂಡನಹಳ್ಳಿ | 48 | ಗುಬ್ಬಲಾಳು (ಭಾಗಶಃ) |
| 23 | ರಾಚೇನಹಳ್ಳಿ | 49 | ಚಿಕ್ಕತೋಗೂರು |
| 24 | ಗೊಲ್ಲಹಳ್ಳಿ | 50 | ದೊಡ್ಡತೋಗೂರು |
| 25 | ತಿಪ್ಪಸಂದ್ರ | 51 | ಬಸಾಪುರ |
| 26 | ಹೆಮ್ಮಿಗೆಪುರ (ಭಾಗಶಃ) | | |

ಮುಖ್ಯ ಅಭಿಯಂತರರು(ತ್ಯಾನೀನಿ-110ಹ)
ಬೆಂಗಳೂರು ಜಲಮಂಡಲಿ